# ಶ್ರೀಜಗನ್ನಾಥದಾಸಾರ್ಯಸ್ತುತಿ



ಕನ್ನಡ ಅನುವಾದ
ಪಂ. ವಾದಿರಾಜಾಚಾರ್ಯ ಕರಣಮ್

## ॥ ಅಥ ಶ್ರೀಜಗನ್ನಾಥದಾಸಾರ್ಯಸ್ತುತಿಃ ॥

ಶ್ರೀಜಗನ್ನಾಥದಾಸಾರ್ಯಂ ಹರಿಗಾಥಾಸುಬೋಧಕಮ್ ।
ಸತ್ಸಿದ್ಧಾಂತಪ್ರವಕ್ತಾರಂ ಸಾದರಂ ಪ್ರಣಮಾಮ್ಯಹಮ್ ॥1॥
ಶ್ರೀನಿವಾಸದಯಾಪಾತ್ರಂ ಶ್ರೀನಿವಾಸಾಹ್ವಯಂ ವಿದಮ್ ।
ಲಕ್ಷ್ಮೀನೃಸಿಂಹಸತ್ಪುತ್ರಂ ಜಗನ್ನಾಥಗುರುಂ ಭಜೇ ॥2॥
ವಿಜಯಾರ್ಯಮಹಾದಾಸಮುದಸ್ಯೋದರವೇದನಾಮ್ ।
ಪ್ರಾಪ್ಯ ಗೋಪಾಲದಾಸಾರ್ಯಾತ್ಸುಖಂ ಲೇಭೇ ನಮಾಮಿ ತಮ್
ಶ್ರೀವಿಠ್ಠಲಾಂಚಿತೇ ಕ್ಷೇತ್ರೇ ಸಮವಾಪ ಸದಂಕಿತಮ್ ।
ಭಜೇಽನಿಶಂ ಸದಾತ್ಮಾನಂ ಜಗನ್ನಾಥಾರ್ಯವಿಠ್ಠಲಮ್ ॥4॥
ನವವೃಂದಾವನೇ ಪದ್ಮನಾಭಾದಿಯತಿಸನ್ನಿಧೌ ।
ರಘುವರ್ಯಂ ಪ್ರತುಷ್ಟಾವ ಜಗನ್ನಾಥಗುರುಂ ಭಜೇ ॥5॥
ರಾಘವೇಂದ್ರಗುರುಂ ಭಕ್ತ್ಯಾ ತುಷ್ಟಾವಾವಹಿತಾತ್ಮನಾ ।
ವರದೇಂದ್ರಾರ್ಯಸಚ್ಛಿಷ್ಯಂ ಜಗನ್ನಾಥಗುರುಂ ಭಜೇ ॥6॥
ಹಂಸಾರಂಭಾಂ ಸತ್ಯಸಂಧಪರ್ಯಂತಾಂ ಸತ್ಪರಂಪರಾಮ್ ।
ಆನಮಾಮೀತ್ಯಸ್ತುವದ್ಯೋ ಜಗನ್ನಾಥಗುರುಂ ಭಜೇ ॥7॥
ಸತ್ಯಬೋಧಂ ಸಮಾರಾಧ್ಯ ಸತ್ಯಬೋಧಮವಾಪ್ತವಾನ್ ।
ಮತ್ಯನೂನಂ ಮಹಾತ್ಮಾನಂ ಜಗನ್ನಾಥಗುರುಂ ಭಜೇ ॥8॥

ಸದ್ಬೋಧಪಾದುಕಾ ದಿವ್ಯಾ ಪೂಜ್ಯತೇಽದ್ಯಾಪಿ ಭಕ್ತಿತಃ ।
ಯಸ್ಯಾಗ್ರೇ ತಮಹಂ ನೌಮಿ ಜಗನ್ನಾಥಾರ್ಯದಾಸಕಮ್ ॥9॥

**ಮಂತ್ರಾಕ್ಷತಾಃ ಪ್ರದೀಯಂತೇಽದ್ಯಾಪಿ ಸದ್ಬೋಧಸನ್ನಿಧೌ ।**
**ಯದ್ದತ್ತಪಾತ್ರರತ್ನೇನ ಜಗನ್ನಾಥಗುರುಂ ಭಜೇ ॥10॥**
**ಜಗನ್ನಾಥಾಖ್ಯದಾಸಾರ್ಯಂ ಜಗನ್ನಾಥದಯಾಲಯಮ್ ।**
**ಜಡಾಂಧಜನಧಾತಾರಂ ಜನೋದ್ಧಾರಂ ನಮಾಮ್ಯಹಮ್ ॥11॥**
**ಶ್ರೀಜಗನ್ನಾಥದಾಸಾರ್ಯಸ್ತುತಿಂ ಪಠತಿ ಯೋ ನರಃ ।**
**ಜಗನ್ನಾಥಕೃಪಾಪಾತ್ರೋ ಭವತ್ಯೇವ ನ ಸಂಶಯಃ ॥12॥**

**॥ ಇತಿ ಶ್ರೀಜಗನ್ನಾಥದಾಸಾರ್ಯಸ್ತುತಿಃ ॥**

## ॥ ಶ್ರೀಜಗನ್ನಾಥದಾಸಾರ್ಯಸ್ತುತಿಃ ॥

**ಶ್ರೀಜಗನ್ನಾಥದಾಸಾರ್ಯಂ ಹರಿಗಾಥಾಸುಬೋಧಕಮ್ ।**

**ಸತ್ಸಿದ್ಧಾಂತಪ್ರವಕ್ತಾರಂ ಸಾದರಂ ಪ್ರಣಮಾಮ್ಯಹಮ್ ॥1॥**

ಶ್ರೀಜಗನ್ನಾಥದಾಸರು ಮಹಾನುಭಾವರು. ಅನೇಕರಿಗೆ ಅವರು ಮಾರ್ಗದರ್ಶಕರಾಗಿದ್ದಾರೆ. ಸಜ್ಜನರಿಗೆ ಭಗವಂತನ ಮಹಿಮೆಯನ್ನು ತಿಳಿಸಲು ಹರಿಕಥಾಮೃತಸಾರವನ್ನು ರಚಿಸಿದ್ದಾರೆ. ಶ್ರೀಮನ್ಮಧ್ವಾಚಾರ್ಯರ ಸಿದ್ಧಾಂತವನ್ನು ಪದ-ಪದ್ಯಗಳ ಮೂಲಕ ಎಲ್ಲೆಡೆ ಪ್ರಚಾರ ಮಾಡಿದ್ದಾರೆ. ಅಂಥ ಜಗನ್ನಾಥದಾಸರನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ.

**ಶ್ರೀನಿವಾಸದಯಾಪಾತ್ರಂ ಶ್ರೀನಿವಾಸಾಹ್ವಯಂ ವಿದಮ್ ।**

**ಲಕ್ಷ್ಮೀನೃಸಿಂಹಸತ್ಪುತ್ರಂ ಜಗನ್ನಾಥಗುರುಂ ಭಜೇ ॥2॥**

ಏಳುಗಿರಿ ಒಡೆಯನಾದ ಶ್ರೀನಿವಾಸನ ದಯೆಯಿಂದ ಜನಿಸಿದವರು ಇವರು. ಆದ್ದರಿಂದ ಶ್ರೀನಿವಾಸನಾಮಾಂಕಿತರಾದರು. ಜ್ಞಾನಿಗಳಾದರು. ಲಕ್ಷ್ಮೀ-ನರಹರಿ ದಂಪತಿಗಳ ಮಕ್ಕಳಾದ ಈ ಜಗನ್ನಾಥದಾಸರನ್ನು ಭಜಿಸುತ್ತೇನೆ.

**ವಿಜಯಾರ್ಯಮಹಾದಾಸಮುದಸ್ಯೋದರವೇದನಾಮ್ ।**

**ಪ್ರಾಪ್ಯ ಗೋಪಾಲದಾಸಾರ್ಯಾತ್ಸುಖಂ ಲೇಭೇ ನಮಾಮಿ ತಮ್ ॥**

ಜಗನ್ನಾಥದಾಸರು ದಾಸದೀಕ್ಷೆಯನ್ನು ಪಡೆಯುವುದಕ್ಕೂ ಮೊದಲು ಮಹಾವಿದ್ವಾಂಸರಾಗಿದ್ದರು. ಒಂದು ಸಂದರ್ಭದಲ್ಲಿ ವಿಜಯದಾಸರನ್ನು ಉದಾಸೀನ ಮಾಡಿದರು. ಆದರ ಫಲವಾಗಿ ಅಸಾಧ್ಯವಾದ ಹೊಟ್ಟೆನೋವಿನಿಂದ ಬಳಲಿದರು. ವಿಜಯದಾಸರ

ಆದೇಶದಂತೆ ಗೋಪಾಲದಾಸರ ಬಳಿ ಹೋದರು. ಅವರ ಅನುಗ್ರಹದಿಂದ ಉದರಶೂಲೆಯನ್ನು ಪರಿಹರಿಸಿಕೊಂಡು ಆಯುಷ್ಮಂತರಾದರು. ನಂತರ ದಾಸದೀಕ್ಷಿತರಾದರು. ಅಂಥ ಜಗನ್ನಾಥದಾಸರನ್ನು ನಮಸ್ಕರಿಸುತ್ತೇನೆ.

**ಶ್ರೀವಿಠ್ಠಲಾಂಚಿತೇ ಕ್ಷೇತ್ರೇ ಸಮವಾಪ ಸದಂಕಿತಮ್ ।**

**ಭಜೇಽನಿಶಂ ಸದಾತ್ಮಾನಂ ಜಗನ್ನಾಥಾರ್ಯವಿಠ್ಠಲಮ್ ॥4॥**

ಶ್ರೀನಿವಾಸಾಚಾರ್ಯರು ವಿಠ್ಠಲನಿಂದ ವಿಭೂಷಿತವಾದ ಪಂಢರಪುರಕ್ಕೆ ಹೋದರು. ಚಂದ್ರಭಾಗಾನದಿಯಲ್ಲಿ ಸ್ನಾನ ಮಾಡುವಾಗ ಜಗನ್ನಾಥವಿಠ್ಠಲಾಂಕಿತವಾದ ಶಿಲೆಯನ್ನು ಪಡೆದರು. ದೇವರು ನೀಡಿದ ಅಂಕಿತ ಎಂದು ಭಾವಿಸಿದರು. ವಿಠಲಯ್ಯಾ ವಿಠಲಯ್ಯಾ ಎಂದು ವಿಠ್ಠಲನನ್ನು ಸ್ತುತಿಸಿದರು. ದಾಸರಾಗಿ ದೀಕ್ಷೆಯನ್ನು ಪಡೆದರು. ಅಂಥ ಜಗನ್ನಾಥದಾಸರನ್ನು ನಿರಂತರವೂ ಭಜಿಸುತ್ತೇನೆ.

**ನವವೃಂದಾವನೇ ಪದ್ಮನಾಭಾದಿಯತಿಸನ್ನಿಧೌ ।**

**ರಘುವರ್ಯಂ ಪ್ರತುಷ್ಟಾವ ಜಗನ್ನಾಥಗುರುಂ ಭಜೇ ॥5॥**

ನವವೃಂದಾವನದಲ್ಲಿ ಪದ್ಮನಾಭತೀರ್ಥರೇ ಮುಂತಾದ ಒಂಭತ್ತು ಯತಿವರೇಣ್ಯರು ಸನ್ನಿಹಿತರಾಗಿದ್ದಾರೆ. ಅವರ ಸಮಕ್ಷಮದಲ್ಲಿ ಶ್ರೀರಘುವರ್ಯತೀರ್ಥರು ಕೂಡಾ ಸನ್ನಿಹಿತ-ರಾಗಿದ್ದಾರೆ. ಶ್ರೀಜಗನ್ನಾಥದಾಸರು ಅಲ್ಲಿರುವ ಮೂಲ ವೃಂದಾವನಗಳ ದರ್ಶನವನ್ನು ಮಾಡಿಕೊಂಡರು. ಪದ್ಮನಾಭತೀರ್ಥಾದಿಗಳನ್ನು ಕ್ರಮವಾಗಿ ಸ್ತುತಿಸಿ ಶ್ರೀರಘು-ವರ್ಯರನ್ನು ಕೂಡಾ ಸ್ತುತಿಸಿದರು. ಅವರೆಲ್ಲರ ಅನುಗ್ರಹ-

ವನ್ನು ಪಡೆದರು. ಕೃತಾರ್ಥರಾದರು. ಅಂಥ ಮಹಾನುಭಾವರಾದ ಜಗನ್ನಾಥದಾಸರನ್ನು ಸೇವಿಸುತ್ತೇನೆ. ಈ ಹಾಡು ಈ ವಿಧವಾಗಿದೆ.

ವೃಂದಾವನಗಳಿಗೆ ಆನಮಿಪೆ ನಿತ್ಯ
ನಂದತೀರ್ಥರ ಮತೋದ್ಧಾರಕರೆನಿಪ ನವ ॥ಪ॥
ವರ ಮಧ್ವಮುನಿ ವಿಮಲಕರಪದ್ಮಸಂಜಾತ
ಗುರು ಪದ್ಮನಾಭ ರಾಮರ ಕವೀಂದ್ರ ತತ್-
ಕರಸರೋರುಹಜಾತ ವಾಗೀಶಮುನಿ ರಘು-
ವರ್ಯ ಗೋವಿಂದಾಖ್ಯ ಒಡೆಯರ ಪವಿತ್ರತಮ ॥1॥
ಶ್ರೀ ಸುಧೀಂದ್ರಾರ್ಯರ ಪ್ರಪುತ್ರರೆನಿಪ ಸುಧೀಂದ್ರ
ವ್ಯಾಸರಾಯ ಶ್ರೀನಿವಾಸ ಮುನಿಯಾ
ಭೂಸುರರು ಪರಮ ಸಂತೋಷದಲಿ ಸ್ಮರಿಸೆ ನಿ-
ರ್ದೋಷರನೆ ಮಾಡಿ ಅಭಿಲಾಷೆ ಪೂರೈಸುತಿಹ ॥2॥
ದೇವತೆಗಳು ಇವರು  ಸಂದೇಹ ಬಡೆ ಸಲ್ಲ, ಮಿ-
ಥ್ಯಾವಾದಿಗಳ ಪರಾಭವ ಮಾಡಿ
ಈ ವಸುಂಧರೆಯೊಳಗೆ ಕೀರ್ತಿಯುತರಾಗಿ, ಲ-
ಕ್ಷ್ಮೀವರ ಜಗನ್ನಾಥವಿಠಲನ ಐದಿಹರ ॥3॥

**ರಾಘವೇಂದ್ರಗುರುಂ ಭಕ್ತ್ಯಾ ತುಷ್ಟಾವಾವಹಿತಾತ್ಮನಾ ।**

**ವರದೇಂದ್ರಾರ್ಯಸಚ್ಛಿಷ್ಯಂ ಜಗನ್ನಾಥಗುರುಂ ಭಜೇ ॥5॥**

ಸಮಾಹಿತಮನಸ್ಕರಾಗಿ ಗುರುಗಳಾದ ರಾಘವೇಂದ್ರ-ಸ್ವಾಮಿಗಳನ್ನು ಅನೇಕಪದ್ಯಗಳಿಂದ ಸ್ತುತಿಸಿದರು. ವರ-ದೇಂದ್ರತೀರ್ಥರಿಂದ ಸಚ್ಛಾಸ್ತ್ರೋಪದೇಶವನ್ನು ಪಡೆದರು. ಅಂಥ ಜಗನ್ನಾಥದಾಸರನ್ನು ಭಕ್ತಿಯಿಂದ ಸ್ತುತಿಸುತ್ತೇನೆ.

**ಹಂಸಾರಂಭಾಂ ಸತ್ಯಸಂಧಪರ್ಯಂತಾಂ ಸತ್ಪರಂಪರಾಮ್ ।**

**ಆನಮಾಮೀತ್ಯಸ್ತುವದ್ಯೋ ಜಗನ್ನಾಥಗುರುಂ ಭಜೇ ॥6॥**

ಹಂಸನಾಮಕನಾದ ಪರಮಾತ್ಮನನ್ನು ಮೊದಲು ಮಾಡಿ ಸತ್ಯಸಂಧರ ವರೆಗೆ ವಿರಾಜಮಾನವಾದ ಸತ್ಪರಂಪರೆಯನ್ನು **ಆನಮಿಪೆ ಗುರುಸಂತತಿಗೆ ಸತತಗೆ ...** ಎಂಬ ಪದ್ಯದಿಂದ ಸ್ತುತಿಸಿದರು. ಆ ಎಲ್ಲ ಮಹಾನುಭಾವರ ಅನುಗ್ರಹಕ್ಕೆ ಸತ್ಪಾತ್ರರಾದರು. ಅಂಥ ಮಹಾತ್ಮರಾದ ಜಗನ್ನಾಥದಾಸರನ್ನು ಭಜಿಸುತ್ತೇನೆ.

**ಸತ್ಯಬೋಧಂ ಸಮಾರಾಧ್ಯ ಸತ್ಯಬೋಧಮವಾಪ್ತವಾನ್ ।**

**ಮತ್ಯನೂನಂ ಮಹಾತ್ಮಾನಂ ಜಗನ್ನಾಥಗುರುಂ ಭಜೇ ॥7॥**

ಸತ್ಯಬೋಧತೀರ್ಥರನ್ನು ಭಕ್ತಿಯಿಂದ ಆರಾಧಿಸಿದರು. ಸತ್ಯವಾದ ಬೋಧವನ್ನು ತತ್ತ್ವಜ್ಞಾನವನ್ನು ಪಡೆದರು. ಜ್ಞಾನಿವರೇಣ್ಯರಾದ, ಮಹಾತ್ಮರಾದ ಜಗನ್ನಾಥದಾಸರನ್ನು ಭಜಿಸುತ್ತೇನೆ.

**ಸದ್ಬೋಧಪಾದುಕಾ ದಿವ್ಯಾ ಪೂಜ್ಯತೇಽದ್ಯಾಪಿ ಭಕ್ತಿತಃ ।**

**ಯಸ್ಯಾಗ್ರೇ ತಮಹಂ ನೌಮಿ ಜಗನ್ನಾಥಾರ್ಯದಾಸಕಮ್ ॥8॥**

ಜಗನ್ನಾಥದಾಸರ ಪ್ರಾರ್ಥನೆಗೆ ಅನುಗುಣವಾಗಿ ತಮ್ಮ ಪಾದುಕೆಗಳನ್ನು ಸತ್ಯಬೋಧರು ನೀಡಿದರು. ಆ ಪಾದುಕೆಗಳು ಇವತ್ತಿಗೂ ಮಾನವಿಯ ಜಗನ್ನಾಥದಾಸರ ಸಮಕ್ಷಮದಲ್ಲಿ ಪೂಜಿತವಾಗುತ್ತಿವೆ. ಅಂಥ ಜಗನ್ನಾಥದಾಸರನ್ನು ನಮಸ್ಕರಿಸುತ್ತೇನೆ.

**ಮಂತ್ರಾಕ್ಷತಾಃ ಪ್ರದೀಯಂತೇಽದ್ಯಾಪಿ ಸದ್ಬೋಧಸನ್ನಿಧೌ ।**

**ಯದ್ದತ್ತಪಾತ್ರರತ್ನೇನ ಜಗನ್ನಾಥಗುರುಂ ಭಜೇ ॥9॥**

ಜಗನ್ನಾಥದಾಸರ ಮೇಲೆ ಸತ್ಯಬೋಧರು ಮಾಡಿರುವ ಅನುಗ್ರಹ ಅಪಾರ. ಆ ಅನುಗ್ರಹವನ್ನು ಸ್ಮರಿಸಿಕೊಳ್ಳುತ್ತಾ ಮಂತ್ರಾಕ್ಷತಾ ಬುಟ್ಟಿಯನ್ನು ಸತ್ಯಬೋಧರಿಗೆ ಸಮರ್ಪಿಸಿದರು. ಸತ್ಯಬೋಧರು ಆ ಮಂತ್ರಾಕ್ಷತಾಬುಟ್ಟಿಯನ್ನು ಉಪಯೋಗಿಸುತ್ತಿದ್ದರು. ಅದೇ ಮಂತ್ರಾಕ್ಷತಾಬುಟ್ಟಿಯಿಂದ ಈಗಲೂ ಸತ್ಯಬೋಧರ ಸನ್ನಿಧಾನದಲ್ಲಿ ಪರ್ಯಾಯಸ್ಥರಾದ ಸತ್ಯಬೋಧರ ವಂಶಸ್ಥರು ಮಂತ್ರಾಕ್ಷತೆಯನ್ನು ನೀಡುತ್ತಾರೆ. ಅಂಥ ಮಹಾನುಭಾವರಾದ ಜಗನ್ನಾಥದಾಸರನ್ನು ಭಜಿಸುತ್ತೇನೆ.

**ಜಗನ್ನಾಥಾಖ್ಯದಾಸಾರ್ಯಂ ಜಗನ್ನಾಥದಯಾಲಯಮ್ ।**

**ಜಡಾಂಧಜನಧಾತಾರಂ ಜನೋದ್ಧಾರಂ ನಮಾಮ್ಯಹಮ್ ॥10॥**

ಜಗನ್ನಾಥನ ದಯೆಗೆ ಪಾತ್ರರಾದ, ಜಡರಾದ ಅಂಧರಾದ ಸಜ್ಜನರನ್ನು ಅನುಗ್ರಹಿಸುವ, ಸುಜನೋದ್ಧಾರಕರಾದ ಜಗನ್ನಾಥದಾಸವರೇಣ್ಯರನ್ನು ಭಕ್ತಿಯಿಂದ ನಾನು ನಮಸ್ಕರಿಸುತ್ತೇನೆ.

**ಶ್ರೀಜಗನ್ನಾಥದಾಸಾರ್ಯಸ್ತುತಿಂ ಪಠತಿ ಯೋ ನರಃ ।**

**ಜಗನ್ನಾಥಕೃಪಾಪಾತ್ರೋ ಭವತ್ಯೇವ ನ ಸಂಶಯಃ ॥11॥**

ಶ್ರೀಜಗನ್ನಾಥದಾಸರ ಸ್ತುತಿ ಇದು. ನಿತ್ಯವೂ ಪಠಿಸಬೇಕು. ಅಂಥವರು ಜಗನ್ನಾಥನ ಕೃಪೆಗೆ ಪಾತ್ರರಾಗುತ್ತಾರೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ.

**॥ ಇತಿ ಶ್ರೀಜಗನ್ನಾಥದಾಸಾರ್ಯದಶಕಮ್ ॥**